# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 837 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಎಸ್.ವಿ.ಸಂಕನೂರ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 20.12.2021 |
| ಉತ್ತರಿಸುವ ಸಚಿವರು | : | ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಎಷ್ಟು ಪಡಿತರ ಕಾರ್ಡ್‌ದಾರರಿಗೆ ಒಂದರಂತೆ ಒಂದು ನ್ಯಾಯಬೆಲೆ ಅಂಗಡಿಯನ್ನು ಸ್ಥಾಪಿಸಲಾಗುತ್ತದೆ; | ಸಾರ್ವಜನಿಕ ವಿತರಣಾ ಪದ್ಧತಿ ಆದೇಶ 2016 ರನ್ವಯ ಗ್ರಾಮಾಂತರ ಪ್ರದೇಶದಲ್ಲಿ 500 ಮತ್ತು ನಗರ ಪ್ರದೇಶಗಳಲ್ಲಿ 800 ಪಡಿತರ ಚೀಟಿಗಳಿಗೆ ಒಂದರಂತೆ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಅವಕಾಶವಿದೆ. ಇದಲ್ಲದೇ ಅಗತ್ಯವಿರುವೆಡೆ ಹಾಡಿಗಳು/ತಾಂಡಗಳು/ ಗೊಲ್ಲರಹಟ್ಟಿ/ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಕಾಲೋನಿ ಪ್ರದೇಶಗಳಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ಕನಿಷ್ಠ 100 ಪಡಿತರ ಚೀಟಿಗಳಿದ್ದಲ್ಲಿ, ನ್ಯಾಯಬೆಲೆ ಅಂಗಡಿ ತೆರೆಯಲು ಅವಕಾಶ ನೀಡಲಾಗಿದೆ. |
| (ಆ) | 50 ಕೆ.ಜಿ ಯ ಒಂದು ಮೂಟೆಯನ್ನು ಕಾರ್ಡ್‌ದಾರರಿಗೆ ನೀಡುವಾಗ ಖಾಲಿ ಚೀಲಕ್ಕೂ 10 ರೂ. ಹೆಚ್ಚುವರಿಯಾಗಿ ವಸೂಲಿ ಮಾಡುತ್ತಿರುವುದು ಸರಿಯೇ; (ಸ್ಪಷ್ಟವಾದ ಮಾಹಿತಿಯನ್ನು ನೀಡುವುದು) | ಈ ರೀತಿ ಯಾವುದೇ ಪ್ರಕರಣಗಳು ದಾಖಲಾಗಿರುವುದಿಲ್ಲ. |
| (ಇ) | ಕಲಬುರಗಿ ಜಿಲ್ಲೆಯಲ್ಲಿ ಅಫಜಲಪುರ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿರುವ ನ್ಯಾಯಬೆಲೆ ಅಂಗಡಿಗಳು ಎಷ್ಟು; ಮತ್ತು ಒಟ್ಟು ಪಡಿತರ ಕಾರ್ಡುದಾರರ ಸಂಖ್ಯೆ ಎಷ್ಟು; ಪ್ರತಿ ತಿಂಗಳು ಈ ನ್ಯಾಯಬೆಲೆ ಅಂಗಡಿಗಳಿಗೆ ಸರಬರಾಜು ಮಾಡುತ್ತಿರುವ ಆಹಾರ ಧಾನ್ಯಗಳ ಪ್ರಮಾಣ ಎಷ್ಟು; | ಕಲಬುರಗಿ ಜಿಲ್ಲೆಯ ಅಫಜಲಪುರ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿ ಎರಡು ನ್ಯಾಯಬೆಲೆ ಅಂಗಡಿಗಳು ಇರುತ್ತವೆ. ಪಡಿತರ ಚೀಟಿಗಳ ವಿವರ ಈ ಕೆಳಕಂಡಂತಿದೆ. |

| ಕ್ರ.ಸಂ | ನ್ಯಾಯಬೆಲೆ ಅಂಗಡಿಯ ಸಂಖ್ಯೆ | ಎಎವೈ ಪಡಿತರ ಚೀಟಿ | ಪಿಹೆಚ್‌ಹೆಚ್ ಪಡಿತರ ಚೀಟಿ | ಎನ್‌ಪಿಹೆಚ್‌ಹೆಚ್ ಪಡಿತರ ಚೀಟಿ | ಒಟ್ಟು ಪಡಿತರ ಚೀಟಿ |
|---|---|---|---|---|---|
| 1 | 67 | 84 | 886 | 223 | 1193 |
| 2 | 68 | 75 | 795 | 116 | 986 |

ಆಹಾರಧಾನ್ಯ ಹಂಚಿಕೆ ಪ್ರಮಾಣದ ವಿವರ ಡಿಸೆಂಬರ್ 2021ರಲ್ಲಿದ್ದಂತೆ

| ಕ್ರ.ಸಂ | ನ್ಯಾಯಬೆಲೆ ಅಂಗಡಿ ಸಂಖ್ಯೆ | NFSA | | | PMGKAY | |
|---|---|---|---|---|---|---|
| | | ಅಕ್ಕಿ | | ಗೋಧಿ | ಅಕ್ಕಿ | |
| | | AAY | PHH | | AAY | PHH |
| 1 | 67 | 29.40 | 152.20 | 17.72 | 19.80 | 152.20 |
| 2 | 68 | 26.25 | 135.95 | 15.90 | 17.35 | 135.95 |

| | | |
|---|---|---|
| (ಈ) | ಅಫಜಲಪುರ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿ ಹೊಸದಾಗಿ ಇನ್ನೊಂದು ನ್ಯಾಯಬೆಲೆ ಅಂಗಡಿಯನ್ನು ಸ್ಥಾಪಿಸುವ ಅವಶ್ಯಕತೆ ಇದೆಯೇ; ಹಾಗಿದ್ದಲ್ಲಿ, ಹೊಸ ನ್ಯಾಯಬೆಲೆ ಅಂಗಡಿಯನ್ನು ಸ್ಥಾಪಿಸುವುದು ಯಾವಾಗ; ನ್ಯಾಯಬೆಲೆ ಅಂಗಡಿಯ ಸ್ಥಾಪನೆಯ ಪ್ರಕ್ರಿಯೆ ಮತ್ತು ನಿಯಮಗಳೇನು; (ವಿವರ ನೀಡುವುದು) | ಇಲ್ಲ |
| (ಉ) | ಒಂದು ಬಾರಿ ಪಡಿತರ ಸಾಮಗ್ರಿ/ ಆಹಾರಧಾನ್ಯವನ್ನು ಪಡೆಯಲು ಪಡಿತರ ಕಾರ್ಡ್‌ದಾರರು ಪಡೆಯದಿದ್ದಲ್ಲಿ, ಆ ವೇಳೆ ಪಡೆಯದಿದ್ದ ಆಹಾರ ಧಾನ್ಯವನ್ನು ಮುಂದಿನ ತಿಂಗಳಿನ ಪಡಿತರ ವಿತರಣೆಯ ವೇಳೆ ಪಡೆದುಕೊಳ್ಳಬಹುದೇ ? | ಇಲ್ಲ. |

ಆನಾಸ 75 ಆನಾಸ 2021 (ಇ-ಆಫೀಸ್)

(ಉಮೇಶ್.ವಿ.ಕತ್ತಿ)

ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು

ಮತ್ತು ಗ್ರಾಹಕರ ವ್ಯವಹಾರಗಳ

ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು